


# ಕರ್ನಾಟಕ  ವಿಧಾನ ಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

## ಚುಕ್ಕೆ ಗುರುತಿನ ಪ್ರಶ್ನೆ

ದಿನಾಂಕ :   17-03-2021   ಪ್ರಶ್ನೆ ಸಂಖ್ಯೆ :   202 (1249)

ಸದಸ್ಯರ ಹೆಸರು ಮತ್ತು ಕ್ಷೇತ್ರ :   ಶ್ರೀ ಎನ್. ರವಿಕುಮಾರ್ (ವಿಧಾನಸಭೆಯಿಂದ  ಚುನಾಯಿತರಾದವರು)

ಉತ್ತರ ನೀಡಬೇಕಾದ ದಿನಾಂಕ :   17-03-2021

ಉತ್ತರಿಸುವ ಸಚಿವರು :   ಕಂದಾಯ ಸಚಿವರು

ವಿಷಯ :   ಮುದ್ರಾಂಕ ಶುಲ್ಕದಲ್ಲಿ ನಷ್ಟ ಉಂಟುಮಾಡಿರುವ ಕುರಿತು

(ಅ) ಬೆಳಗಾವಿ ಉಪನೋಂದಣಾಧಿಕಾರಿಯವರು 2018ರಲ್ಲಿ ಸರ್ವೆ ಸಂ 3928, 3929, 3929/1, 3929/2 ಮತ್ತು 3929/5 ನ್ನು ಕಡಿಮೆ ದರಕ್ಕೆ ನೋಂದಣಿ ಮಾಡುವ ಮೂಲಕ ಸರಕಾರಕ್ಕೆ ರೂ. 12.92 ಕೋಟಿ ಮುದ್ರಾಂಕ ಶುಲ್ಕ ನಷ್ಟ ಉಂಟುಮಾಡಿದ್ದರೂ ಸಹ 2 ವರ್ಷಗಳವರೆಗೆ ಸದರಿಯವರ ಮೇಲೆ ಕ್ರಮ ಕೈಗೊಳ್ಳದಿರಲು ಕಾರಣವೇನು ;

(ಆ) ಈ ವಿಳಂಬಕ್ಕೆ ಹೊಣೆಗಾರರು ಯಾರು ; ಅವರ ಮೇಲೆ ಯಾವ ಕ್ರಮಕೈಗೊಳ್ಳಲಾಗಿದೆ ; ರೂ. 12.92 ಕೋಟಿ ಮುದ್ರಾಂಕ ಶುಲ್ಕ ನಷ್ಟದ ಮೇಲಿನ ಬಡ್ಡಿ ಪಾವತಿಸುವವರು ಯಾರು ;

(ಇ) ಮಾರ್ಗಸೂಚಿ ದರಕ್ಕಿಂತ ಕಡಿಮೆ ದರಕ್ಕೆ ನೋಂದಣಿ ಮಾಡಿರುವ ಕುರಿತು ಹಿರಿಯ ನೋಂದಣಾಧಿಕಾರಿಯವರು ಪರಿಶೀಲಿಸದಿರಲು ಕಾರಣವೇನು ; ನೋಂದಣಿ ಮಹಾಪರಿವೀಕ್ಷಕರು ಈ ಬಗ್ಗೆ ಸರ್ಕಾರಕ್ಕೆ ವರದಿ ನೀಡಿದ್ದು ಯಾವಾಗ ;

(ಈ) ರಾಜ್ಯದಲ್ಲಿ ಕಳೆದ 3 ವರ್ಷಗಳಲ್ಲಿ ಈ ರೀತಿಯ ಎಷ್ಟು ಪ್ರಕರಣಗಳು ಸರಕಾರದ ಗಮನಕ್ಕೆ ಬಂದಿವೆ ; ಇದರಿಂದ ಒಟ್ಟು ಎಷ್ಟು ರಾಜಸ್ವ ನಷ್ಟವಾಗಿದೆ; ನಷ್ಟ ವಸೂಲಾತಿಗಾಗಿ ಕೈಗೊಂಡ ಕ್ರಮಗಳೇನು ; ಎಷ್ಟು ಉಪ ನೋಂದಾಣಾಧಿಕಾರಿಗಳ ಮೇಲೆ ಕ್ರಮ ಕೈಗೊಳ್ಳಲಾಗಿದೆ ? (ಜಿಲ್ಲಾವಾರು ವಿವರ ನೀಡುವುದು)